ಕುಸುಮಗಳು

# ಪ್ರಾರ್ಥನಾಗಾನ



1950



ಕೇರಿಕ್ಕಾಡು, ಮಾಸ್ತರ್ ವಿಷ್ಣು ಭಟ್ಟ.

# ಕಾವ್ಯ ಕುಸುಮಗಳು

---

ಕವಿ: ಕೀರಿಕ್ಕಾಡು, ಮಾಸ್ತರ್ ವಿಷ್ಣು ಭಟ್ಟ.

---

1950

ಮುದ್ರಕರು:

ಎಸ್. ಕೃಷ್ಣ ಭಟ್ಟ,

ಸಿರಿಗನ್ನಡ ಪ್ರೆಸ್, ಕಾಸರಗೋಡು.

---

ಬೆಲೆ: ಎಂಟಾಣೆ.

# ಮುನ್ನುಡಿ

"ಕಾವ್ಯ ಕುಸುಮಗಳು" ಎಂಬ ಈ ಕವನ ಸಂಗ್ರಹವನ್ನು ಶ್ರೀಮಾನ್ ಕೀರಿಕ್ಕಾಡು ಮಾಸ್ತರ್ ವಿಷ್ಣು ಭಟ್ಟರು ಬರೆದಿರುತ್ತಾರೆ. ಶ್ರೀಯುತರು ಇದಕ್ಕೆ ಚೆಲುವಾದ ಹೆಸರನ್ನಿರಿಸಿದ್ದಾರೆ. ಈ ಹೆಸರು ಕವನಗಳಿಗೆ ಅನುರೂಪವಾಗಿಯೇ ಇರುತ್ತದೆ. ಕುಸುಮಗಳಿಗಿರುವ ಸೊಗಸು, ಬಣ್ಣ, ಪರಿಮಳ ಇವೆಲ್ಲಾ ಇದರಲ್ಲಿರುವ ಕವನಗಳಿಗಿವೆ ಎಂದು ನನ್ನ ಭಾವನೆ. ಅವುಗಳು ಮಾತ್ರ ನಮ್ಮದೇ ಆದ ಸೇವಂತಿಗೆ, ಮಲ್ಲಿಗೆಗಳೋ ಅಥವಾ ನಾವು ಇತ್ತೀಚೆಗೆ ಬೆಳೆಸುವಂತಹ ದೆಹಲಿಯಾ, ಝೀನಿಯಾಗಳೊ — ಎನ್ನುವ ವಿವೇಚನೆಯನ್ನು ಸೌಹಾರ್ದ್ರ ಹೃದಯಿಗಳಾದ ಓದುಗರ ಪಾಲಿಗೆ ಬಿಟ್ಟಿರುತ್ತೇನೆ. "ಇವುಗಳು ಚಂದವಾಗಿವೆ" — ಎನ್ನುವವರಿಗೆ ಇವು ಚಂದವಾಗಿ ತೋರಬಹುದು; "ಇವುಗಳಲ್ಲಿ ಏನಿದೆ" ಎನ್ನುವವರಿಗೆ ಇವು ಶೂನ್ಯವಾಗಿ ತೋರಬಹುದು. ಭಾವಗೀತೆಗಳ ಲಕ್ಷಣವೇ ಇದು. ಟಾಗೋರರ, ಯಾ, ವರ್ಡ್ಸ್‌ವರ್ತರ ಭಾವಗೀತೆಗಳ ಕುರಿತು ಮಾಡಿದ ಇಂತಹ ಟೀಕೆಗಳು ಚರಿತ್ರ ಸಿದ್ಧವಾಗಿವೆ. ಹೀಗಿರುತ್ತಾ ಭಾವಗೀತೆಗಳ ಕುರಿತು ಭಿನ್ನಾಭಿಪ್ರಾಯಗಳು ಬರುವಂಥಾದ್ದು ಸಹಜ. ಅಂತು ಕವಿಗಾಗಲಿ ನನಗಾಗಲಿ ಈ ಕವನಗಳಲ್ಲಿ ತೋರಿದ ಅಂದಚಂದಗಳು ಓದುಗರಿಗೂ ತೋರಲಿ ಎಂದು ಹರಸಿ ಈ ಮುನ್ನುಡಿಯನ್ನು ಇಲ್ಲಿಗೆ ಮುಗಿಸುತ್ತೇನೆ.

**ಬೋರ್ಡ್ ಹೈಸ್ಕೂಲು,**
ಕಾಸರಗೋಡು,
ಗಾಂಧಿಜಯಂತಿ
೨-೧೦-೫೦

**U. Bhavani Shanker Rao.**
B A., L. T.
Headmaster

# ಪರಿವಿಡಿ





---

ಕೇರಿಕ್ಕಾಡು ಮಾಸ್ತರರ ಅಚ್ಚಾದ ಇತರ ಕೃತಿಗಳು:-

ಯಕ್ಷಗಾನ ರಣಮಲ್ಲವಿಜಯ.

ಯಕ್ಷಗಾನ ಶ್ವೇತಕುಮಾರ ಚರಿತ್ರೆ.



ಕೀರಿಕ್ಕಾಡು, ಮಾಸ್ತರ್ ವಿಷ್ಣು ಭಟ್ಟ.

॥ ಶ್ರೀ ಗೋಪಾಲಕೃಷ್ಣಾಯ ನಮಃ ॥

## ೧. ಶ್ರೀ ಕೃಷ್ಣ

ಕಸ್ತೂರಿತಿಲಕದಿಂ ಕೌಸ್ತುಭಾಭರಣದಿಂ ।
ಮಸ್ತಕದ ಮಣಿ ಮಕುಟ ಮಾಣಿಕ್ಯದಿಂದೇ ॥
ವಿಸ್ತಾರ ವಿಶ್ವಮಂ ಮೋಹಿಸುತ್ತೆಸೆಯುತಿಹ ।
ಸ್ವಸ್ತಿಕರ ಮೂರ್ತಿ ಶ್ರೀಕೃಷ್ಣ ಜಯ ವಂದೇ ॥ ೧ ॥

ಹುಟ್ಟಿದಾಗಲೆ ಭವದ ಬಂಧನವ ಕಡಿಯುವೊಲ್ ।
ಹೊಟ್ಟೆಯೊಳಗಾಂತವರ ದಾಸ್ಯವನು ಮುರಿದೇ ॥
ಕೆಟ್ಟಯೋಚನೆಯಿಂದ ವಿಷವೊಲೆಯನುಣಿಸಿದಳ ।
ಕುಟ್ಟಿಕೊಂದೆಳೆಯ ಶೈಶವದೆ ನೀ ಮೆರೆದೇ ॥ ೨ ॥

ಬಾಲಲೀಲೆಯೊಳ್ ಖಳಜಾಲವನು ಸಂಹರಿಸಿ ।
ಬಾಳದೀವಿಗೆಯಾದೆ ನಂದಗೋಕುಲಕೇ ॥
ಹಾಲು ಬೆಣ್ಣೆಯನೆಲ್ಲ ಶೇಖರಿಪ ಹೊಸತತ್ವ ।
ಶೀಲವಂ ಕಲಿಸಿರುವೆ ಬಡಗೋಪಕುಲಕೇ ॥ ೩ ॥

ಬಾಯಿಯೊಳ್ ಬ್ರಹ್ಮಾಂಡವಂ ತೋರಿಸುತ ಸಾಕು ।
ತಾಯಿಗಚ್ಚರಿಗೊಳಿಸಿ ಮಾಯೆ ಪರಿಹರಿಸೀ ॥
ಬಾಯಾರಿ ಬಸವಳಿದ ಬಡವರನ್ನುದ್ಧರಿಸಿ ।
ಮಾಯಾ ವಿನೋದ ನೀ ಮೆರೆದೆ ಜಯವೆರಸೀ ॥ ೪ ॥

ಕಿರುಬೆರಳಿನಿಂದ ಗೋವರ್ಧನಾದ್ರಿಯನೆತ್ತಿ ।
ತುರುಗಳಂ ಗೋಪಾಲವೃಂದವಂ ಪೊರೆದೇ ॥
ಗರಳದುಬ್ಬಿನೊಳಿರ್ದ ಕಾಳಿಂಗನಂ ಮಥಿಸಿ ।
ಸರಸಿರುಹ ಭವನ ಮೋಹವ ಹರಿಸಿ ಮೆರೆದೇ ॥ ೫ ॥

ಹಿಂಸೆಗಾಗರವಿರ್ದ ಮಧುರಾಪುರಕೆ ಸಾರಿ ।
ಕಂಸಾಸುರನ ಕಾಳಗದಿ ಕಾದಿ ತರಿದೀ ॥
ಧ್ವಂಸಗೈದುಳಿದ ದಾನವರ ನೊಂದಿರ್ಪ ಯದು ।
ವಂಶವನೆ ಬಂಧನವ ಬಿಡಿಸುತಲಿ ಪೊರೆದೀ ॥ ೬ ॥

ಕಾಲಯವ ಮುರನರಕ ಹಂಸಡಿಬಿಕಾದಿಗಳ ।
ಕಾಲನೂರಿಗೆ ಕಳುಹಿ ಸಾಧುಗಳ ಕಾಯ್ದೇ ॥
ಕಾಳಗದಿ ಪಾರ್ಥನಿಗೆ ಸಾರಥ್ಯವನು ಮಾಡಿ ।
ಪಾಲಿಸಿದೆ ಪಾಂಡವರ ಕೌರವರ ಪೊಯ್ದೇ ॥ ೭ ॥

ಪಾರ್ಥನಿಗೆ ಗೀತಾಸುಧಾರಸವ ಸುರಿಸಿಯೆ ಯ ।
ತಾರ್ಥವಂ ಬೋಧಿಸಿದೆ ಸರ್ವರಿಂಗರಿಯೋ ॥
ತೀರ್ಥಪ್ರಸಾದವದು ನಿನ್ನದೆಮಗೆಲೆ ದೇವ ।
ಸ್ಫೂರ್ತಿ ಸುಗಮ ಪ್ರಕಾಶ ಜೀವನದ ಗುರಿಯೋ ॥ ೮ ॥

ಅಜನಾಗಿ ಸೃಷ್ಟಿಸುವಿ ಹರಿಯಾಗಿ ಪಾಲಿಸುವಿ ।
ಭುಜಗ ಭೂಷಣನಾಗಿ ಲಯಗೈವಿ ಜಗವಾ ॥
ನಿಜಸ್ಥಿರವು ನೀ ಹೊರತು ಕಾಣೆ ನಾ ಬೇರೊಂದ ।
ಭಜಕಜನ ಭಾಗ್ಯನಿಧಿ ಭವ್ಯ ಪ್ರಭಾವ ॥ ೯ ॥

ಅರವಿಂದ ದಳನಯನ ಆಶ್ರಿತ ಜನೋದ್ಧರಣ ।
ಪರಮ ಪಾವನರೂಪ ಪಾಪನಿರ್ಲೇಪಾ ॥
ವರಮೌನಿ ಪುರನಿಲಯ ವನಮಾಲ ನುತವಿಜಯ ।
ಸ್ಥಿರ ವಿಶ್ವಮಣಿದೀಪ ಶ್ರೀಕೃಷ್ಣಗೋಪಾ ॥ ೧೦ ॥

# ೨. ಧನ್ಯೆ ಭಾರತಾಂಬೆ

ಧನ್ಯೆ ಭಾರತಾಂಬೆ ವಿಶ್ವ। ಮಾನ್ಯೆ ವಂದ್ಯೆ ಸ್ವರ್ಣಗರ್ಭೆ।
ಧಾನ್ಯದವಸ ಭಾಗ್ಯವರ್ಷ ಸುರಿಸಿ ಹರಸುವೀ॥
ಚೆನ್ನ ಚೆಲುವ ಜ್ಞಾನದೊಲವ।
ನನ್ನಿ ಸಚ್ಚರಿತ್ರ ಗೆಲುವ।
ಮನ್ನಿಸಿತ್ತು ನಿನ್ನ ಸುತರ ಯಶವ ಮೆರೆಸುವೀ ॥ ೧ ॥

ಪರರ ದಾಸ್ಯ ಸಂಕಲೆಯನು। ಮುರಿದ ಪೂಜ್ಯ ಗಾಂಧಿಜಿಯನು।
ಹೆರಸಿ ಹಾಡಿದಂಥ ಪುಣ್ಯವಂತೆ ಸುವ್ರತೇ॥
ಸುರಿವ ಕಂಬನಿಯನು ವೀರ।
ಸ್ಫುರಿತವಾಣಿಯಿಂದ ಪೂಸಿ।
ಸಿರುವ ಜವಹರನನು ಪಡೆದ ವಿಮಲ ಸಂಸ್ಕೃತೇ ॥ ೨ ॥

ದಾಸ ಮೋತಿಲಾಲ ವರ ಸು। ಭಾಸ ಭೋಸ ವಲ್ಲಭಾಯಿ।
ದೇಶ ಬಂಧು ರಾಜಗೋಪಾಲ ಮುಖ್ಯರಾ॥
ಪೋಷಿಸಿದ ವಿಶೇಷ ಕೀರ್ತಿ।
ಮಿಾಸಲಿಟ್ಟ ಧರ್ಮ ಸ್ಫೂರ್ತಿ।
ಮಾಸದೆಂದಿಗೂ ಚರಿತ್ರೆಯೊಳಗೆ ಸುಸ್ಥಿರಾ ॥ ೩ ॥

ಯುಗಯುಗಂಗಳಲ್ಲಿ ದೇವ। ನುಗಮ ನಿನ್ನೊಳಾಗಿ ದೇವ।
ತೆಗಳೆ ಹೊಗಳೆ ಹೊಳಪನೇರ್ವ ಹೊಸ ಕಲಾಮಯೇ॥
ಅಘವಿದೂರೆ ತತ್ವಸಾರೆ।
ನಿಗಮಾಭರಣೆ ಶಾಸ್ತ್ರೋದ್ಧಾರೆ।
ಸುಗುಣೆ ರಮ್ಯೆ ರಂಜನೀಯೆ ರಕ್ಷಿಸವ್ವಯೇ ॥ ೪ ॥

# ೩. ಗಾಂಧೀ ಮಹಾತ್ಮಾ

ಭಾರತದ ಬಂಧನವ ಬಿಡಿಸಿದ ಭಾಗ್ಯದಾತನೆ ಖ್ಯಾತನೇ ।
ಭಾರತಾಂಬೆಯ ಪುತ್ರರತ್ನನೆ ಸತ್ಯರೂಪ ಪುನೀತನೇ ॥
ಸಾರ ನೀತಿ ಪ್ರಚಾರ ವಿದ್ಯಾಧಾರ ಧರ್ಮ ಪ್ರತೀಕನೇ ।
ಕಾರಣೀಕ ಕೃಪಾಮಯೂಖ ಪ್ರಸಾರ ಗಾಂಧಿಮಹಾತ್ಮನೇ ॥ ೧ ॥

ಪಾಶ್ಚಿಮಾತ್ಯರ ಬಣ್ಣಗಾರಿಕೆ ಕಣ್ಣಿಗದು ಸೊಗಸಾಗಲೂ ।
ನೆಚ್ಚಿ ಮೆಚ್ಚುತ ಭಾರತೀಯರ ಮನವದಾಕಡೆ ಸಾಗಲೂ ॥
ದುಶ್ಚಟವು ತಲೆದೋರಿ ಶಕ್ತಿಯು ಕುಗ್ಗಿ ದಾಸ್ಯತೆಯೇರಲೂ ।
ಅಚ್ಚರಿಯಗೊಳೆ ಜನರು ನೀ ಹೊಸತತ್ವ ಬಿತ್ತಿದೆ ಜಗದೊಳೂ ॥ ೨ ॥

ಲೋಕಭೀಕರ ಹಿಂಸೆಗಾಕರವಾದ ಮಾರಣ ಯುದ್ಧವಾ ।
ಧಿಃಕರಿಸಿ ಸತ್ಯಾಗ್ರಹಾಸ್ತ್ರವಹಿಂಸೆ ಮಂತ್ರದ ಪಾಠವಾ ॥
ನೀ ಕಲಿಸಿ ಸಂಘಟಿಸಿ ಬಿಡಿಸಿದೆ ಬ್ರಿಟಿಷರಾಳ್ವಿಕೆ ಕಾಟವಾ ।
ನೂಕುನುಗ್ಗಲದಿಲ್ಲದೆದ್ದರು ಬಿಟ್ಟು ತಮ್ಮಯ ಪೀಠವಾ ॥ ೩ ॥

ಭಾರತದ ಬಡವರನು ಕಂಡೆದೆಕರಗಿ ಕರುಣಾ ದೃಷ್ಟಿಯಾ ।
ಬೀರಿ ನೀನರೆಬತ್ತಲೆಯೆ ತಿರುಗಾಡಿ ಜೈಸಿದೆ ಸೃಷ್ಟಿಯಾ ॥
ಸಾರಸಂಸ್ಕೃತಿ ಸಮತೆಯೆಂಬುದ ಸಾರಿ ತೆರೆಸಿದಿ ದೃಷ್ಟಿಯಾ ।
ಧೀರರಂದದಿ ತಲೆಯನೆತ್ತುತ ನಡೆಯತೋರಿದೆ ಬಟ್ಟೆಯಾ ॥ ೪ ॥



## ೪. ಸುಭಾಸ

ಭಾರತಮಾತೆಯ ಭಾಗ್ಯದ ಕ್ಷತ್ರಿಯ ।
ವೀರರಸವೆ ಮೈವೆತ್ತಂತೇ ॥
ಧೀರರೆದೆಯ ಜುಮ್ಮೆನ್ನಲು ಮೆರೆದನು ।
ಶೂರ ಸುಭಾಸನು ಯಶವಾಂತೇ ॥ ೧ ॥

ನಿಶ್ಚಿತ ವೀರೋಕ್ತಿಗೆ ನಡನಡುಗುತ ।
ಪಾಶ್ಚಾತ್ಯರು ಭಯ ಹೊಂದಿದರೂ ॥
ಅಚ್ಚರಿಯೆನಲಾಜಾದ್ ಸರಕಾರದ ।
ಹೆಚ್ಚಳಕೆಲ್ಲರು ಬಾಗಿದರೂ ॥ ೨ ॥

ರಕ್ತಾಕ್ಷರದಲಿ ಸ್ವಾತಂತ್ರ್ಯವ ಬರೆ ।
ದೊಕ್ಕಣಿಸಿದ ಭೋಸನ ಕೀರ್ತಿ ॥
ಅಕ್ಷಯವಾಗಿಯೆ ಬೆಳಗದೆ ಮಾಸದು ।
ಲಕ್ಷಿತವದೆ ವೀರರ ಸ್ಫೂರ್ತೀ ॥ ೩ ॥

ಸಿಂಗಾಪುರದಲಿ ಸಿಂಗಮೆನಲು ರಣ ।
ರಂಗದ ಮಧ್ಯದಿ ಗರ್ಜಿಸಿದಾ ॥
ಆಂಗ್ಲೇಯರ ಹೃದಯಾಂಗಣದಲ್ಲಿ ಭ ।
ಯಾಂಗರದುರಿಯನ್ನೆಬ್ಬಿಸಿದ ॥ ೪ ॥

ರೂಪದೊಳಭಿನವ ಬುದ್ಧನು ಸಹಸ ಪ್ರ ।
ತಾಪದಿ ಸಾಕ್ಷಾತ್ ಪರಶಿವನೂ ॥
ಆ ಪುಣ್ಯಾತ್ಮನು ಪೋದನೆ! ಹಾ! ಯಿಂ ।
ನಾಪನದಾರೋ ಅಂಥವನು ॥ ೫ ॥

# ೫. ನೆಹರು

ಅರುವತ್ತು ವರುಷ ತುಂಬಿದರು ನವಚೈತನ್ಯ ।
ಹುರುಪಿನಿಂ ಭಾರತಕ್ಕಾಗಿ ದುಡಿಯುತ್ತಾ ॥
ಸರುವರುದಯುವ ಸದಾ ಸಾಧಿಸಲು ಹವಣಿಸುವ ।
ವರ ಜವಾಹರ ನೆಹರು ವಿಶ್ವ ವಿಖ್ಯಾತಾ ॥ ೧ ॥

ಭಾರತದ ಮುಖ್ಯಮಂತ್ರಿಯ ಪದವಿ ಬಂತೆಂದು ।
ಹಾರಾಡದತ್ಯಂತ ಸೌಜನ್ಯದಿಂದಾ ॥
ನೂರಾರು ಘನಘೋರ ಸನ್ನಿವೇಶಕ್ಕೆ ಕೈ ।
ಯೂರದೇ ಬಗೆಹರಿಸಿ ಮೆರೆದ ಜಯವೃಂದಾ ॥ ೨ ॥

ಪಾಶ್ಚಿಮಾತ್ಯರು ಮೆಚ್ಚಿ ಬೆಟ್ಟು ಚುಚ್ಚುವ ತೆರದೆ ।
ಆಶ್ಚರ್ಯಮೆನೆ ರಾಷ್ಟ್ರದಾಡಳಿತೆ ನೋಡೀ ॥
ಸಚ್ಚರಿತೆ ಸತ್ಯಸಾನಂದ ಕಾರಣವೆಂಬ ।
ಹೆಚ್ಚಳವ ಕಾಣಿಸಿದ ನಾಡನರನಾಡೀ ॥ ೩ ॥

ಪರಮಪೂಜ್ಯ ಮಹಾತ್ಮಗಾಂಧೀಜಿಯರ ತತ್ವ ।
ಸರುವತ್ರ ಹಬ್ಬುವಂತಚಲ ನಿಷ್ಠೆಯಲೀ ॥
ಗುರುಪಥದೆ ನಡೆನಡೆದು ಗುರಿಮುಟ್ಟೆಲಿಹೆ ಗುಣಾ ।
ಕರ ಜವಾಹರರಿಗಾರೆಣೆಯು ಸೃಷ್ಟಿಯಲೀ ॥ ೪ ॥

ಹಿರಿಯ ಮುತ್ಸದ್ದಿಯೆಂದೆನುತಲಾಂಗ್ಲೇಯರಿಂ ।
ಹಿರಿದಾಗಿ ಮೆಚ್ಚುಗೆಯ ಪಡೆದು ಭುವನದಲೀ ॥
ಪರಮ ಪುರುಷರ ಸಾಲಿನಲಿ ಶೋಭಿಸುವ ಜವಾ ।
ಹರರಿಗಾಯುಷ್ಯ ಸೌಭಾಗ್ಯವೃದ್ಧಿಸಲೀ ॥ ೫ ॥

---

## ೬. ಹಳ್ಳಿ

ಹಳ್ಳಿಯು ಹಲವರು ಹಳಿಯುವುದೇತಕೆ ।
ಹಳ್ಳಿಯೆ ಕೃಷಿಕರ ನೆಲೆವೀಡೂ ॥
ಹಳ್ಳಿಯೊಳಾಗುವ ದವಸವೆ ಪಟ್ಟಣ ।
ದಲ್ಲಿರುವರ ಗ್ರಾಸದ ಪಾಡೂ ॥ ೧ ॥

ಕಂಗಿನ ತೆಂಗಿನ ತಾಳೆಯ ಬಾಳೆಯ ।
ಸಿಂಗರ ಬನಗಳ ಸಿರಿನೋಡೀ ॥
ಕಂಗಳೆ ದಣಿಯುವು ಗದ್ದೆಯ ಪೈರಿನ ।
ಸಂಗತಿ ಮುಗಿಯದು ಮಾತಾಡೀ ॥ ೨ ॥

ಸೊಲ್ಲಿನ ಗುಲ್ಲಿನ ಜಂಝಾಮಾರುತ ।
ಘಲ್ಲಿಸದೆಲ್ಲಿಯು ಶಾಂತತೆಯೇ ॥
ಕಲ್ಲೆದೆ ಕರಗುವ ಮಾರ್ದವ ಮಾತಿನ ।
ಮಲ್ಲಿಗೆ ನಗುವಿನ ಜನತತಿಯೇ ॥ ೩ ॥

ಅರೆಬತ್ತಲೆ ತಿರುಗಾಡುತ ಪ್ರಕೃತಿಯ ।
ಕರೆಗೋಗೊಡುವರು ಜನರೆಲ್ಲಾ ॥
ಪರರನು ವಂಚಿಪ ವಕ್ರಸ್ವಭಾವದ ।
ಪರಿವೆಯೆ ಕಾಣಲ್ಕಲ್ಲಿಲ್ಲಾ ॥ ೪ ॥

ಮೊಗವೆತ್ತುತ ನಗು ನಗುವೋಲಿಹ ಮ ।
ಲ್ಲಿಗೆ ಕುರವಕ ಮಂದಾರಾದೀ ॥
ಸೊಗಸಿನ ಸುಮಗಳ ರಾಜಿಯು ರಾಜಿಪ ।
ಬಗೆಯನು ಬಣ್ಣಿಪರಾರೋದೀ ॥ ೫ ॥

ಗದ್ದೆಯು ಕೆಸರೊಳು ಹೊರಳಾಡುತ ಮನ ।
ಶುದ್ಧತೆಯಿಂದಲಿ ದುಡಿಯುತ್ತಾ ॥
ಇದ್ದುದನುಣ್ಣುತ ತೃಪ್ತಿಯ ಹೊಂದುವ ।
ಉದ್ಯಮ ಶೀಲರೆಯಿಹರತ್ತಾ ॥ ೬ ॥

ಮಿಣಿಮಿಣಿ ದೀಪದೊಳಾದರು ಆತ್ಮದ ।
ಮಿನುಗನು ಕಾಣಲು ಹವಣಿಪರೂ ॥
ಹಣದಾಸೆಯು ಹಗರಣ ಹಿರಿದಾಗದೆ ।
ಹೆಣಗ್ವರು ಹೆಚ್ಚೊ ಸಾತ್ವಿಕರೂ ॥ ೭ ॥

ಹಳ್ಳಿಯೊಳೆಲ್ಲೆಲ್ಲೊ ಸರ್ವೋದಯು ।
ಬೆಳ್ಳಿಯ ಬೆಳಕೇ ಕಾಣಿಸಲೀ ॥
ಸಲ್ಲಲಿ ಶ್ರೀಗುರು ಗಾಂಧೀಜಿಯ ಶ್ರಮ ।
ವೆಲ್ಲಾಭ್ಯುದಯಕು ಮುಂಬರಲೀ ॥ ೮ ॥

---

## ೭. ಎದ್ದೇಳಿ! ಎದ್ದೇಳಿ!

ಎದ್ದೇಳಿ ಎದ್ದೇಳಿ ಎದ್ದೇಳಿರಣ್ಣಾ ।
ಗದ್ದೆಯ ದುಡಿಮೆಗೆ ಮನಮಾಡಿರಣ್ಣಾ ॥ ಪಲ್ಲ ॥

ಕೃಷಿಯೆ ಪ್ರಾಮುಖ್ಯ ನಮ್ಮೀ ದೇಶದಲ್ಲೀ ।
ಕೃಷಿಹೊರತನ್ಯಥ ದಾರಿಯೇನಿಲ್ಲೀ ॥
ಕೆಸರಲ್ಲಿ ಹೊರಳಾಡುವಂಥ ಕಾರ್ಶಿಕರೇ ।
ಉಸಿರು ಜನಾಂಗದ ಸಾಧಕರವರೇ ॥ ೧ ॥

ವಿದ್ಯೆಯು ಕಲಿವುದು ನೌಕರಿಗಲ್ಲಾ ।
ವಿದ್ಯೆಯು ಕಲಿವುದು ತಿರುಗಲಿಕಲ್ಲಾ ॥
ವಿದ್ಯೆಯು ಕಲಿವುದು ಜ್ಞಾನಕೆ ದಾರೀ ।
ವಿದ್ಯಾವಂತನೆ ದುಡಿಮೆಗಾಧಾರೀ ॥ ೨ ॥

ಆಹಾರ ಬೆಳೆಸಿರಿ ಯೆಂದುಸಾರಿದರೇ ।
ಆಹಾರ ಬೆಳೆಯದು ದುಡಿಯಬೇಕಿದಿರೇ ॥
ದೇಹಕ್ಕೆ ಕೆಸರಪ್ಪುದೆಂದು ಯೋಚಿಸದೇ ।
ಸಾಹಸದಿಂ ಗೈಯೋಣ ಯಾಚಿಸದೇ ॥ ೩ ॥

ಸರಕಾರಿಸ್ಥಳ ಖಾಲಿಯಿದ್ದುದನೆಲ್ಲಾ ।
ದರಖಾಸ್ತಿಗೀಯಲಿ ಬಡವರಿಗೆಲ್ಲಾ ॥
ಪರರಿಗೆ ಕೊಡೆ ತಾಮಾಡೆನೆಂದೆನುವ ।
ನರರಿಂದಲೂ ಕೊಡಿಸಲಿ ಇದ್ದಸ್ಥಳವ ॥ ೪ ॥

ಬರೆಯುವ ಕೈಯೆದ್ದು ನೇಗಿಲ ಹಿಡಿದೂ ।
ಭರಭರನುತ್ತು ಬಿತ್ತುತ ದುಡಿದುಡಿದೂ ॥
ಭರವಸೆಗೈವುದು ಸ್ವಚ್ಛಕ್ತಿಯಲ್ಲೀ ।
ಪರರಿಗೆ ಕೈಯೊಡ್ಡೆ ಯೋಗ್ಯತೆಯೆಲ್ಲೀ ॥ ೫ ॥

ಗಾಂಧೀಜಿಯರ ತತ್ವಸಾರವನರಿದೂ ।
ಒಂದೊಂದನೂ ಗೈವುದು ಭೇದಮರೆದೂ ॥
ಬಂದಿಹ ಸ್ವಾತಂತ್ರ್ಯವುಳಿಸಿಕೊಳ್ಳುವುದೂ ।
ಇಂದು ನಮ್ಮೆಲ್ಲರ ಹೊಂದಿಕೊಂಡಿಹುದೂ ॥ ೬ ॥

## ೮. ಪರಮಾತ್ಮ

ಪರಮಾತ್ಮನಿಲ್ಲೆಂದು ಪರಿಹಾಸಮಾಡದಿರಿ ।
ಪರಮಾತ್ಮನೆಲ್ಲೆಲ್ಲು ಪರಿಪೂರ್ಣನಿಹನೂ ॥
ಪರಮಾತ್ಮನಂಶವೇ ಪ್ರತಿಯೊಂದು ವಸ್ತುಗಳು ।
ಪರಮಾತ್ಮನನು ತಿಳಿಯಲವ ಮುಕ್ತನಹನೂ ॥ ೧ ॥

ಅಖಿಲಾಂಡ ಕೋಟಿ ಬ್ರಹ್ಮಾಂಡ ನಾಯಕನವನೆ ।
ಸಕಲ ಮತಧರ್ಮಗಳು ಪೊಗಳುತಿಹೆವವನಾ ॥
ಭಕತರಾಭಿಷ್ಟವನು ಬಗೆಬಗೆಯೊಳ್ಕೊಡುತಿಹನು ।
ಸುಖಪೂರ್ಣ ಸುಜ್ಞಾನ ಸ್ತುತಿಸುತಿರಲವನಾ ॥ ೨ ॥

ಸೃಷ್ಟಿಯಾ ಸೌಂದರ್ಯವನು ನೋಡೆ ಮನುಜನಿದ ।
ಸೃಷ್ಟಿಸಲು ಬಲ್ಲನೇ ಸಂಶಯುವದ್ಯಾಕೇ ॥
ಸೃಷ್ಟಿಯನನಾದಿಯೆಂಬುವ ವಾದವಿಹುದಿ ತ ।
ನ್ನಷ್ಟಕೇ ಕಾರ್ಯಕಾರಣವಿಲ್ಲದಕ್ಕೇ ॥ ೩ ॥

ಉದಯಾಸ್ತಮಾನ ನಕ್ಷತ್ರ ಗ್ರಹಗತಿಗಳಿಂ ।
ಬುದ ಸೂಕ್ಷ್ಮದೃಷ್ಟಿಯಿಂದವಲೋಕಿಸಿದರೇ ॥
ಅದರೊಳಿರುವ ಮಹತ್ವ ಪರಮಾತ್ಮಶಕ್ತಿಯಿಂ ।
ದದು ತಾನೆ ವ್ಯಕ್ತವಲ್ಲವೆ ಸತ್ಯಕಿದಿರೇ ॥ ೪ ॥

ಜಾತಿಮತ ಭೇದವೆಣಿಸದೆ ಗುಣಗ್ರಾಹ್ಯದಿಂ ।
ಪ್ರೀತಿಪಡುವಾಪರಾಪರ ವಸ್ತುವವನೇ ॥
ಆತನನು ಮರೆಯದಾಚಾರ ಸದ್ಧರ್ಮದಿಂ ।
ನೀತಿನಿಯಮದೊಳಿರ್ಪವನೆ ಜ್ಞಾನಿ ತಾನೇ ॥ ೫ ॥

# ೯. ಓರ್ವ - ಇನ್ನೋರ್ವ

ಮಿರ ಮಿರ ಮಿರುಗುವ ಮೇಲುಪ್ಪರಿಗೆಯೊಳ್ ।
ಒರಗಿಹನಾರಾಮದೊಳೋರ್ವಾ ॥
ಬರಿಬತ್ತಲೆ ಬೀದಿಯ ಹುಡಿದೂಳಲಿ ।
ಹೊರಳುತಲಿರುವನು ಮತ್ತೋರ್ವ ॥ ೧ ॥

ತುಪ್ಪದ ದೋಸೆಯ ತಿನ್ನುತ ತೇಗುತ ।
ಲಿಪ್ಪನು ಬಲು ಸೌಖ್ಯದೊಳೋರ್ವಾ ।
ಉಪ್ಪನ್ನಕೆ ಗತಿಯಿಲ್ಲದೆ ಪೊರೆ ಜಗ ।
ದಪ್ಪನೆಯೆನುತಿಹ ನಿನ್ನೋರ್ವಾ ॥ ೨ ॥

ಉಂಡುದಕರಗಿಸಲೇನೌಷಧಿಯೆಂ ।
ದಂಡಲೆಯುತ ಕೇಳುವನೋರ್ವಾ ॥
ದೊಂಡೆಯೊಣಗಿ ಹಸಿದುದಕೇನ್ ಮದ್ದನು ।
ಕೊಂಡಪುದೆನುತಿಹನಿನ್ನೋರ್ವ ॥ ೩ ॥

ಅಂಗಿಯ ನಾಲ್ಕನು ತೊಟ್ಟೇನ್ ಸೆಕೆಯೆಂ ।
ದಂಗವನಲುಗಿಸುತಿಹನೋರ್ವ ॥
ಅಂಗವ ಮುಚ್ಚಲು ಚಿಂದಿಯ ದಿಲ್ಲದೆ ।
ತಂಗಾಳಿಯೆ! ಯೆನುವನು ಓರ್ವ ॥ ೪ ॥

ವಿದ್ಯುದ್ವ್ಯಾನದಿ ಚರಿಸುತ ಸೌಖ್ಯದೊ ।
ಳಿದ್ದಪ ನಗುಮುಖದಿಂದೋರ್ವ ॥
ಮಧ್ಯಾಹ್ನದ ಉರಿಬಿಸಿಲಿಗೆ ನಡೆಯುತ ।
ತ್ಯೊದ್ದಿಹ ಬೆವರಲಿ ದಣಿದೋರ್ವ ॥ ೫ ॥

ನೋಟಿನ ಕಟ್ಟನು ಬಡ್ಡಿಗೆ ಯಾರಿಗೆ ।
ದಾಟಿಸಲೆನ್ನುತಲಿಹನೋರ್ವ ॥
ಊಟಕೆ ಅಕ್ಕಿಯ ಕೊಳ್ಳಲು ಹಣ ವಹಿ ।
ವಾಟಿಗೆ ಸಿಗದೆನ್ನುವ ನೋರ್ವ ॥ ೬ ॥

ಮಾಳಿಗೆ ಮನೆ ಎಷ್ಟೆನ್ನುತ ಲೆಖ್ಖದ ।
ಹಾಳಿಯ ಮಗುಚುತಲಿಹನೋರ್ವ ॥
ನಾಳೆಗೆ ಗುಡಿಸಲಿಗೇನ್ಗತಿಯೆಂದೇ ।
ಆಲೋಚಿಸುತಿಹನಿನ್ನೋರ್ವ ॥ ೭ ॥

ಆಹಾ ಈ ಲೋಕದೊಳೇನ್ ಸುಖವೆಂ ।
ದೇ ಹರ್ಷದೊಳಿಪ್ಪನು ಓರ್ವಾ ॥
ಹಾ ಹಾ ಜಗದೊಳು ದುಃಖವೆ ಹೊರತಿಂ ।
ನಾಹುದದೇನೆನ್ನುವನೋರ್ವ ॥ ೮ ॥

ಹಣ ವೆಷ್ಟಿದ್ದರು ಮಕ್ಕಳಿಲ್ಲೆನುತ ।
ಲೆಣಿಸುತ ಕೊರಗುತ್ತಿಹ ನೋರ್ವಾ ॥
ಅಣುಗರಿಗೆಲ್ಲಿದೆ ಬಟ್ಟೆಯು ಹಾ? ಯೇ ।
ನುಣಿಸಲಿಯೆಂಬನು ಮತ್ತೋರ್ವಾ ॥ ೯ ॥

ಕಲಿತಿಹೆ ವಿದ್ಯೆಯು ಕೆಲಸವದಿಲ್ಲೆಂ ।
ದಲೆಯುತ ಯೋಚಿಸುತಿಹನೋರ್ವ ॥
ಕಲಿಯದೆ ನಾ ಸೋತೆನು ಯೆಂದೆನ್ನುತ ।
ಕಳವಳಿಸುತ್ತಿಹನಿನ್ನೋರ್ವಾ ॥ ೧೦ ॥

---

# ೧೦. ಹರಿಜನರ ಮೊರೆ

ಹರಿಜನರೆಂದರೆ ಹರದಾರಿ ದೂರ ।
ಸರಿಯುವದೇಕಿಷ್ಟು ನಮ್ಮೊಳೀನ್ವೈರ ।
ಪರಮಾತ್ಮನಿದಿರೊಳು ನಾವೆಲ್ಲರೊಂದೇ ।
ಪರಮಾತ್ಮನೊಬ್ಬನೆ ನಮಗೆಲ್ಲ ತಂದೇ ॥ ೧ ॥

ಗುಣಕರ್ಮದಿಂದ ನಾಲ್ಕಾಯ್ತಂತೆ ವರ್ಣಾ ।
ಗಣಿಸದೆ ನಮ್ಮ ಪಂಚಮರೆಂಬಿರಣ್ಣಾ ॥
ಮನಸ್ಸಾಕ್ಷಿಗೊಪ್ಪುವ ಮಾತಲ್ಲ ನೋಡಿ ।
ಮುನಿದು ಮೂದಲಿಸದೆ ಪ್ರೇಮದೊಳಾಡೀ ॥ ೨ ॥

ಬಾವಿಗೆ ನಿಮ್ಮವನೊಬ್ಬನು ಬೀಳೇ ।
ಧಾವಿಸಿ ನಾವ್ಬಂದು ತೆಗವೆವು ಮೇಲೇ ॥
ನೀವದನೆಣಿಸದೆ ದೂರ ದೂಡುವಿರೀ ।
ನೋವಿಂದ ಬಿದ್ದರು ಮುಟ್ಟಲಂಜುವಿರೀ ॥ ೩ ॥

ಗೋಮಾಂಸತಿನ್ನುವ ಪಂಥಕ್ಕೆ ಸೇರೇ ।
ಛೀ ಮಾಡದಿರುವಿರಿ ಮನೆಗೆ ಹತ್ತಿದರೇ ॥
ಪಾಮರರಿಂದೆಮ್ಮ ಪಳಿವುದೆ ಹೀಗೇ ।
ಸ್ವಾಮಿ ಮೆಚ್ಚುವ ಕಾರ್ಯವೇ ನೋಡಿ ಹೇಗೇ ॥ ೪ ॥

ಜಾತಿಯ ಮೇಲುಕೀಳೆನ್ನುವ ಭಾವಾ ।
ಏತಕೆ ನಾವೆಲ್ಲ ರಾಷ್ಟ್ರದ ಜೀವಾ ॥
ನೂತನಯುಗವಿದಿನ್ನಾದರು ನಿಮ್ಮಾ ।
ರೀತಿಯು ಬದಲಾಗಬೇಕದೆ ಧರ್ಮಾ ॥ ೫ ॥

## ೧೧. ಮತಭ್ರಾಂತತೆ

ಮತಮತವೆನ್ನುತ ಮತಿಗೆಡಲೇತಕೆ ।
ಮತ ಹಲವಾದರು ಗುರಿಯೊಂದೇ ॥
ಮತವೆಲ್ಲವು ಪರಮಾತ್ಮನ ಸೇರುವ ।
ಪಥಹೊರತೇನಿಹುದದರಿಂದೇ ॥ ೧ ॥

ಹರಿಯುವ ನದಿಗಳು ಹಲವಿದ್ದರು ಸಾ ।
ಗರವನೆ ಸೇರುವ ರೀತಿಯಲೀ ॥
ಹರಿಯೆನ್ನಲಿ ಹೋ ಅಲ್ಲಾ ಯೆನ್ನಲಿ ।
ಸ್ಮರಿಸುವದೊಬ್ಬನ ಹೊರತೆಲ್ಲೀ ॥ ೨ ॥

ಜಲವೆನ್ನುತ ನೀರೆನ್ನುತ ನಾವು ।
ಹಲವಾದರು ವಸ್ತುವದೊಂದೇ ॥
ನೆಲೆಯರಿಯದೆ ನೇಹವ ಬಿಟ್ಟೇನೇನ್ ।
ಗಳಹೆಲು ಗಾಂಪನೆಯುವ ಮುಂದೇ ॥ ೩ ॥

ಬಂಡುಣಿತಂಡವು ಹಲವು ರಸಂಗಳ ।
ಕೊಂಡರು ಕೊನೆಗದು ಜೇನೊಂದೇ ॥
ಖಂಡಿತ ತತ್ವವ ತಿಳಿಯದೆ ಕಾದುವ ।
ಪುಂಡಾಟಿಕೆ ನಿಲ್ಲಲಿಯಿಂನೇ ॥ ೪ ॥

ದೇವರ ದೃಷ್ಟಿಯೊಳೆಲ್ಲವರೊಂದೇ ।
ದೇವರಿಗೆಲ್ಲಿದೆ ಮೇಲ್ಕೀಳೂ ॥
ನಾವೇ ಮೇಲೆಂದನ್ಯರ ಹಳಿವ ಸ್ವ ।
ಭಾವವು ಮನುಜರಿಗದು ಹಾಳೂ ॥ ೫ ॥

ಹಿಂದೂ ಮುಸ್ಲಿಮ್ ಕ್ರೈಸ್ತ ಸಿಕ್ಕ ।
ರೆಂದೂ ಭೇದವ ಕಲ್ಪಿಸದೇ ॥
ಹೊಂದಿಕೆಯಿಂದನ್ಯೋನ್ಯದಿ ಪ್ರೇಮಾ ।
ನಂದದಿ ಬಾಳಲು ಸೌಖ್ಯವದೇ ॥ ೬ ॥

ಸತ್ಯಸಹಿಷ್ಣುತೆ ಧರ್ಮಸುಸಂಸ್ಕೃತಿ ।
ಕೃತ್ಯಾಕೃತ್ಯ ವಿಚಾರವಿದೂ ॥
ಎತ್ತೆತ್ತಲು ವೈವೆತ್ತಿರ ಬೇಕದೆ ।
ಉತ್ತಮ ಲಕ್ಷಣ ಸಾಧಿಪುದೂ ॥ ೭ ॥

ಸರ್ವಮತಂಗಳ ಸಾರವ ತಿಳಿಯದೆ ।
ಗರ್ವಿಸಿ ಮತ್ಸರಗೊಳ್ಳುವುದೂ ॥
ಸರ್ವಥ ಸಲ್ಲದು ಸಹನೆಯೊಳೀಕ್ಷಿಸೆ ।
ಬರ್ವದು ಜ್ಞಾನವು ತಿಳಿನಹುದೂ ॥ ೮ ॥

ಒಂದೇ ತಾಯಿಯ ಮಡಿಲೊಳಗಾಡಿದ ।
ಕಂದರೆ ತಮ್ಮೊಳು ಹೊಡೆದಾಡೀ ॥
ಕಂಧರವನು ಗರಗರನೇ ಕಡಿವುದು ।
ಎಂದೆಂದಿಗು ಸಮವೇ ? ನೋಡೀ ॥ ೯ ॥

ಅಹಹಾ ! ಮತಭ್ರಾಂತರ ದುಷ್ಕರ್ಮವ ।
ಗ್ರಹಿಸಲು ಕಂಬನಿ ಸುರಿಯುವುದೂ ॥
ಮಹಿಳೆಯರೆನ್ನದೆ ಮಕ್ಕಳೆಂದೆನ್ನದೆ ।
ಮಹಿಗೊರಗಿಸಿದರು ಕಡಿಕಡಿದೂ ॥ ೧೦ ॥

ಎಷ್ಟೋ ಮನೆಗಳು ಮಸಣವ ಕಂಡವ ।
ದೆಷ್ಟೋ ನಾಡೇ ಕಾಡಾಯ್ತೂ ॥
ಕಷ್ಟದೊಳೆಂತೋ ಬದುಕಿದ ಜನರಿಗೆ ।
ಹೊಟ್ಟೆಯ ಬಟ್ಟೆಯ ಗತಿ ಹೋಯ್ತೂ ॥ ೧೧ ॥

ರಕ್ತದ ಹೊಳೆಯೊಳೆ ಈಜಾಡಿದರು ವಿ।
ಚಿತ್ರವಿದಯ್ಯೋ ಪರಮಾತ್ಮಾ ॥
ಉತ್ತಮ ಮಾನವ ಜನ್ಮಕೆ ಸಲ್ಲದ।
ಕೃತ್ಯವ ಗೈವವ ದುಷ್ಟಾತ್ಮಾ ॥ ೧೨ ॥

ಭಾರತಕೋಸುಗ ಸಕಲವ ನೀಗಿದ।
ಭಾರತಭಾಗ್ಯವಿಧಾತನನೂ ॥
ಕ್ರೂರತೆಯಿಂ ಮತಭ್ರಾಂತನು ಕೈಗುಂ।
ಡೇರಿಸಿ ಕೊಂದನು ಬಳಿಕೇನೂ ॥ ೧೩ ॥

ವೃದ್ಧನು ಪೂಜ್ಯನು ಸುಜ್ಞನು ವಿಶ್ವಪ್ರ।
ಸಿದ್ಧನು ಸಂಜೆಯ ಪ್ರಾರ್ಥನೆಗೇ ॥
ಎದ್ದಿಹೆ ಸಮಯದಿ ಗುಂಡಿಕ್ಕುತಲೇನ್।
ಸಿದ್ಧಿಸಿತೋ ಹಾಃ ಧೂರ್ತನಿಗೇ ॥ ೧೪ ॥

ಕರುಣಾಮಯ ಮಹಾತ್ಮಾಗಾಂಧಿಯ।
ಮರಣದ ದೃಶ್ಯವ ಸ್ಮರಿಸುತ್ತಾ ॥
ತೊರೆಯುವದಿನ್ನಾದರು ಮತಭ್ರಾಂತಿಯ।
ಸರುವೋದಯವಪ್ಪುದು ಸತತಾ ॥ ೧೫ ॥

---

## ೧೨. ಕೃಷಿಕ

ಕೋಳಿಕೂಗದ ಮುನ್ನಯೇಳುವನು ಬಡಕೃಷಿಕ।
ಆಲಸ್ಯವಿಲ್ಲದೇ ದುಡಿವನನವರತಾ ॥
ಕಾಲಕಾಲಕೆ ಉತ್ತು ಬಿತ್ತಿ ಬೆಳೆಯನು ಬೆಳೆಸಿ
ವೇಳೆಯನ್ನೊಂದಿಪ್ಪ ಹಾಳೆಸಗನಾತಾ ॥ ೧ ॥

ಮಾಸಿ ಮಣ್ಣಾದ ವಸ್ತ್ರವನುಟ್ಟು ಗದ್ದೆಯಲಿ।
ಹೇಸದೇ ಕೆಸರೆಂದು ನೇಗಿಲನು ಹಿಡಿದೂ॥
ನೇಸರೇರಿಯೆ ನೆತ್ತಿವರೆಗೆ ಹೊತ್ತಾದರಾ।
ಯಾಸವೆಣಿಸದೆ ಕಷ್ಟಪಡುವನವ ದುಡಿದೂ ॥ ೨ ॥

ಕತ್ತಿಯನು ಹಿಡಕೊಂಡು ಗುಡ್ಡಗುಡ್ಡವ ಸುತ್ತಿ।
ಹೊತ್ತು ಹೊರೆ ಹೊರೆ ಸೊಪ್ಪು ಸೌದೆಯನು ತಂದೂ॥
ಎತ್ತು ಕೋಣಗಳ ಹುಲ್ಲಿತ್ತು ಸಾಕುತ್ತ ದಿನ।
ನಿತ್ಯ ಗೇಯುವನು ತುತ್ತನ್ನವನೆ ತಿಂದೂ ॥ ೩ ॥

ಸತಿಸುತರು ಸಹಿತ ಪ್ರತಿಯೊಂದು ಕೆಲಸದೊಳವನ।
ಜೊತೆಯೊಳೇ ದುಡಿಯುವರು ಅರೆಬತ್ತಲೆಯಲೀ॥
ಧೃತಿಗೆ ಬೆಟ್ಟನು ಚುಚ್ಚಲೇ ಬೇಕು ಬೆಳೆಯಾಗ।
ದತಿಕಷ್ಟವಾದರೂ ಹೋರ್ವ ಗದ್ದೆಯಲೀ ॥ ೪ ॥

ಅಕ್ಷರಾಭ್ಯಾಸವಿಲ್ಲದೆ ಹೋದರೂ ಸೀತಿ।
ಶಿಕ್ಷಣದೊಳೆಳ್ಳಿನಿತು ಬಿಟ್ಟಿಲ್ಲವವನೂ॥
ರಕ್ಷಿಸುವನೊಬ್ಬನೇ ಪರಮಾತ್ಮನೆಂದು ಮನ।
ಸ್ಸಾಕ್ಷಿಗೆರಡಿಲ್ಲದೇ ಧ್ಯಾನಗೈಯುವನೂ ॥ ೫ ॥

---

## ೧೩. ಸುರೆ

ಸುರೆಯನು ಕುಡಿವುದು ಸರಿಯಲ್ಲವೆಂದೂ।
ಸರುವ ಮತಂಗಳು ಸಾರುವವಿಂದೂ॥
ಸುರೆಯನು ಸೇವಿಸಲದು ದೊಡ್ಡ ಪಾಪಾ।
ಸುರೆಯನು ಕೊಂಡವ ನರಕಕ್ಕೆ ಪೋಪಾ ॥ ೧ ॥

ಮದ್ಯವ ಸೇವಿಸಿ ಮತ್ತೇರಿದಾಗಾ ।
ಕದ್ಯಲು ಮುಂದಕೆ ಕೈಪೋಪುದಾಗಾ ॥
ಉದ್ಯಮ ಪೊಳ್ಳಿದೊ ಕೆಟ್ಟದೊಯೆಂದೂ ।
ಬುಧ್ಯರಿಯದೆ ಮಾಳ್ಪನೇನಾದರೊಂದು ॥ ೨ ॥

ಹೆಂಡದ ಮತ್ತಿಗೆ ಮನೆಯೊಳಗಿರುವಾ ।
ಹೆಂಡತಿ ಮಕ್ಕಳ ಹೊಡೆಯಲು ಬರುವಾ ॥
ಹೊಂಡದೊಳಾದರು ಹೊರಳುವನವನೂ ।
ಭಂಡರಂತೇನೇನೊ ಬಾಯೊಳನ್ನುವನೂ ॥ ೩ ॥

ಕುಡುಕಗೆ ಸತ್ಯದ ಗಂಧವೆಯಿಲ್ಲಾ ।
ಕುಡುಕಗೆ ಬೋಧಿಸಲವ ಕೇಳಲೊಲ್ಲಾ ॥
ಕುಡುಕಗೆ ಸಿಕ್ಕಿದಲ್ಲೆಲ್ಲವು ಸಾಲಾ ।
ಕುಡುಕಗೆ ಪ್ರತಿಯೊಂದು ವಿಷಯದಿ ಸೋಲಾ ॥ ೪ ॥

ಕಳ್ಳನು ಕುಡಿದರಾರೋಗ್ಯಕು ಹಾನೀ ।
ಕಳ್ಳನು ಕೈಯಿಂದ ಮುಟ್ಟನು ಜ್ಞಾನೀ ॥
ಕಳ್ಳಿನೊಳಿಹುದೊಂದು ರೀತಿಯ ವಿಷವೂ ।
ಕಳ್ಳಿಂದ ದೂರವಿಹೆದೆ ಪುಣ್ಯಯಶವೂ ॥ ೫ ॥

---

## ೧೪. ಯಕ್ಷಗಾನ

ದಕ್ಷಿಣಕನ್ನಡ ಜಿಲ್ಲೆಯೊಳೊಂದು ಸ ।
ಲ್ಲಕ್ಷಣ ಲಕ್ಷಿತ ಕಲೆಯೆಂದೂ ॥
ಶಿಕ್ಷಿತ ಜನರೇ ಸನ್ಮಾನಿಸುವರು ।
ಯಕ್ಷರಗಾನವನೊಲಿದಿಂದೂ ॥ ೧ ॥

ಎಷ್ಟೋ ಕಾಲಗಳಿಂದಿದು ತನ್ನ ಪ್ರ।
ತಿಷ್ಠೆಯ ಬೆಳಗುತ ಬಂದಿಹುದೂ ॥
ಇಷ್ಟರೊಳೇ ತನ್ನಭ್ಯುದಯುವ ನವ।
ಪಟ್ಟಣಕೂ ಕೊಟ್ಟೆಸೆಯುವುದೂ ॥ ೨ ॥

ಮೊದಮೊದಲಿದರೊಳಗಜ್ಞರು ಕೆಲಜನ।
ತುದಿಬುಡವರಿಯದೆ ಸೇರಿದರೂ ॥
ವಿಧವಿಧದಿಂ ಪರಿಹಾಸ್ಯಕ್ಕೆಡೆ ಕೊ।
ಟ್ಟಿದು ನಿಜವೆಂದೆನಲೂ ಬಹುದೂ ॥ ೩ ॥

ಆದರದೆಂತೋ ತನ್ನಯ ಶಕ್ತಿಯ।
ಕಾದಿಟ್ಟುಳುಹಿತು ಘನತೆಯನೂ ॥
ಆಧುನಿಕರೆ ತಲೆದೂಗುತಲೊಳಪೊ।
ಕ್ಕಾದರಿಸಿದರಾ ವಿದ್ಯೆಯನೂ ॥ ೪ ॥

ನೀತಿಪುರಾಣವ ಸುಲಭದಿ ಜನರಿಗೆ।
ಮಾತಿನ ಕ್ರಮದಲಿ ತಿಳುಹಿಸಿತೂ ॥
ಜಾತೀಭೇದವದಿಲ್ಲದದೊಂದೇ।
ರೀತಿಯೊಳೆಲ್ಲರನೀಕ್ಷಿಸಿತೂ ॥ ೫ ॥

ಅಕ್ಷರವಿಲ್ಲದ ಹಳ್ಳಿಯ ಕುರುಬಗು।
ಶಿಕ್ಷಣ ಜ್ಞಾನವನೀಯುತ್ತಾ ॥
ಸಾಕ್ಷರತೆಯ ಸಂಪಾದಿಸುವಂದದಿ।
ರಕ್ಷಿಸುತೆಸೆಯಿತು ರಾಜಿಸುತಾ ॥ ೬ ॥

ಕೃಷಿಕಗೆ ವಿಶ್ರಾಂತಿಯ ಸಮಯದಿ ನವ।
ರಸದೂಟದ ಸವಿಯುಣಿಸುತ್ತಾ ॥
ವ್ಯಸನ ಭಯಾಲಸ್ಯವ ಬಿಡಿಸಿಯೆ ಸಂ।
ತಸ ಬಡಿಸಿತು ಸನ್ನುತಿಗೊಳುತಾ ॥ ೭ ॥

ಧನಿಕಬಡವನೆಂದೆನ್ನುವ ಭೇದವ ।
ನೆಣಿಸದೆ ಯೆಲ್ಲವರೊಂದಾಗೀ ॥
ಮನವೆಚ್ಚುಗೆಯಿಂ ಕುಳಿತೋಲೈಸುವ ।
ರೆನಲೇನ್ ಪುಣ್ಯೋದಯ ಭಾಗೀ ॥ ೮ ॥

ವೇದಪುರಾಣವನೋದಿದರರಿಯದೆ ।
ಪೋದರೆ ಸತ್ಯವ ತಿಳಿಯುವರೇ ॥
ಹಾದಿಯಿದೊಂದು ಮಹೋದಯವಲ್ಲವೆ ।
ವಾದಿಸಲಿದಕೂ ಜನರಿಹರೇ ॥ ೯ ॥

ಅದಕೇನ್ಗೈವುದು ಕೊರತೆಯನೇ ಹುಡು ।
ಕದಡೇನ್ಹನತೆಯದೆಂದೊಂದೂ ॥
ವಿಧದಲಿ ಪೇಳುವ ಜನರಿರಲೂ ಬಹು ।
ದದರಿಂ ಕಲೆಗಾಗದು ಕುಂದೂ ॥ ೧೦ ॥

ಕೊರತೆಯದೊಂದೂ ಯಿಲ್ಲೆಂದಾನೂ ।
ಒರೆಯೆನು ಇದ್ದರೆ ಕಲೆಗಲ್ಲಾ ॥
ಅರಿಯದ ಜನರದರೊಳು ಕೈಯಾಡಿಸಿ ।
ಬರಿಸುವರದಕದು ಹೊಣೆಯಲ್ಲಾ ॥ ೧೧ ॥

ಅದ ಸರಿಗೊಳಿಸುವ ಭಾರವು ಬೇರಾ ।
ರದು ? ನಮ್ಮದೆ ವಿದ್ವಜ್ಜನರೂ ॥
ಸದಭಿಪ್ರಾಯದೊಳೊಂದಾಗುತ ದುಡಿ ।
ವುದೆ ಕಾರ್ಯವು ಕಲೆಗೊಗರೂ ॥ ೧೨ ॥

ತುಳುವನ ಮಲೆಯಾಳಿಯ ಬಾಯೊಳು ಬಲು ।
ಸುಲಭದಿ ಕನ್ನಡ ಬರಿಸಿರುವಾ ॥
ಕಲೆಯಿದೆ ಸರಿ ಕರ್ನಾಟಕ ಮಾತೆಯು ।
ಗೆಲವಿಂ ತೋರ್ದಳು ನಗುಮೊಗವಾ ॥ ೧೩ ॥

ದೃಶ್ಯಶ್ರಾವ್ಯಗಳೆರಡೂ ಯಿದರೊಳ ।
ವಶ್ಯತೆಗೊಂಡುದು ಹಿರಿಮೆಯುದೂ ॥
ವಶ್ಯರು ಜನರಿದಕೆಂಬುದಕೇ ಸಾ ।
ದೃಶ್ಯವೆ ಕಲೆ ಕಳೆಯೇರಿದುದೂ ॥ ೧೪ ॥

ಪಾಮರ ಪಂಡಿತರೆಲ್ಲರು ಯಿದರನು ।
ಪ್ರೇಮಿಪುದೊಂದು ವಿಶಿಷ್ಟತೆಯೂ ॥
ಸ್ವಾಮಿತ್ವದಿ ತನ್ನೆಡೆಯೊಳ್ ನಲಿಸುವು ।
ದೇ ಮಹದಾನಂದಾಢ್ಯತೆಯೂ ॥ ೧೫ ॥

ಕನ್ನಡ ಮಾತೆಯ ಸೇವೆಯ ಮಾಡಿದ ।
ಪುಣ್ಯದೊಳಿದು ಮುನ್ನಡೆಯುವುದೂ ॥
ಕನ್ನಡಿಗರ ಸೌಭಾಗ್ಯವು ದೇವಿ ಪ್ರ ।
ಸನ್ನತೆಯಾಂತಿಹಳೆನ್ನುವುದೂ ॥ ೧೬ ॥

ಏಕೋಭಾವದೊಳೆಷ್ಟೋ ಜನ ಪ್ರ ।
ತ್ಯೇಕ ವಿಚಾರವನೇ ಮರೆದೂ ॥
ಈ ಕಲೆಗೋಸುಗ ಜೀವನ ಸವೆಯಿಪ ।
ರಾಕಡೆ ಪಂಡಿತರೀಕ್ಷಿಪುದೂ ॥ ೧೭ ॥

ಅವರಿಗೆ ಬೆಂಬಲವಿನ್ನೂ ಸಾಲದು ।
ಕವಿವಿದ್ವಜ್ಜನರೊಂದಾಗೀ ॥
ಕವಲು ಮತಾಭಿಪ್ರಾಯವ ಬದಿಗಿ ।
ಟ್ಟು ವಿಶೇಷೋತ್ಸುಕರಾಗೀ ॥ ೧೮ ॥

ದುಡಿದರೆ ಕಲೆ ತನ್ನಯ ನಿಜ ತೇಜದ ।
ಬೆಡಗನು ನಾಡಿಗೆ ಕಾಣಿಪುದೂ ॥
ಪಡೆದೆಮ್ಮನು ಮುದ್ದಿಸಿ ಸಲಹಿದ ಕ ।
ನ್ನಡ ಮಾತೆಗೆ ಸಂತಸವಹುದೂ ॥ ೧೯ ॥

## ೧೫. ಕನ್ನಡ ದೇವಿ

ಕನ್ನಡ ದೇವಿಯ ಸೇವೆಯ ಮಾಳ್ಪುದು ।
ಕನ್ನಡಿಗರ ಕರ್ತವ್ಯವದೂ ॥
ಕನ್ನಡ ಕನ್ನಡವೆನ್ನುತ ಬಾಯೊಳು ।
ಬಣ್ಣಿಸೆ ಸುಮ್ಮನೆ ಫಲವಿರದೂ ॥ ೧ ॥

ಒಂದೆರಡೋ ಹಲವಾರೋ ಸಾಧಿಸು ।
ವಂದದಿ ಕೃತಿಗಳ ಬರೆಬರೆದೂ ॥
ನಿಂದಿಸಲೀ ಜನಹೊಗಳಲಿ ಯೋಚಿಸ ।
ದೊಂದನು ಕೆಲಸವ ಮಾಡುವುದೂ ॥ ೨ ॥

ನವಸುಮ ಮಂಜರಿ ಮುಡಿದಾನಂದದಿ ।
ತವೆ ಶೋಭಾಮಯಳಾಗಿರ್ದೂ ॥
ವಿವಿಧಾಲಂಕೃತೆ ವಿಶ್ವಸುಮಾನಿತೆ ।
ಯಿವಳೆಂದೆನಲೇನ್ ಶ್ಲಾಘ್ಯವದೂ ॥ ೩ ॥

ಹಿಂದಿನ ವೈಭವ ವೆಣಿಪುದು ವಿಜಯದ ।
ದುಂದುಭಿ ಮೊಳಗಿದುದೆಲ್ಲೆಲ್ಲೂ ॥
ಸುಂದರಿ ಸುರುಚಿರೆ ಕಾಲಂದುಗೆ ಖಿಣಿ ।
ರೆಂದೆನೆ ಕುಣಿಕುಣಿದಾಡಿದಳೂ ॥ ೪ ॥

ಖಂಡೆಯದೊಳ್ ರಿಪುಮಂಡೆಯೊಡೆದ ಪ್ರ ।
ಚಂಡ ಕಲಿಗಳನು ಪಡೆದಿಹಳೂ ॥
ಪಂಡಿತಕವಿಗಳ ಪೆತ್ತಾನಂದವ ।
ಗೊಂಡ ಯಶೋಮಯೆಯಾಗಿಹಳೂ ॥ ೫ ॥

ರನ್ನನ ಜನ್ನನ ಪಂಪನ ಪೊನ್ನನ ।
ಬಣ್ಣನೆ ಬಲ್ಮೆಗೆ ಮಿರುಗಿದಳೂ ॥
ಹೊನ್ನಮ್ಮನ ಲಕ್ಷ್ಮೀಶನ ಕೇಶಿಯ ।
ಚೆನ್ನುಡಿಯಿಂಪಿನೊಳೆಸೆದಿಹಳೂ ॥ ೬ ॥

ನಾರ್ಣಪ್ಪನ ನರಸಿಂಹನ ನವ ಮು ।
ದ್ದಣ್ಣನ ಕೃತಿಯಿಂ ಪೆರ್ಚಿದಳೂ ॥
ಪುಣ್ಯ ಪುರುಷರುದ್ಭವ ಕೆಡೆಗೊಟ್ಟುವು ।
ಹೋನ್ನತ ಕೀರ್ತಿಯ ತಾಳಿದಳೂ ॥ ೭ ॥

ಪಡುಗಡಲೇ ಕಾಲ್ತೊಳೆದೋಲ್ಪೈಪುದು ।
ಬಿಡುಗಣ್ಣರೆ ತಲೆದೂಗುವರೂ ॥
ಎಡಬಲದೊಳಗಿಹ ಸೋದರಿಯರು ನಗ ।
ಲೆಡೆಗೊಡದಿರ್ಪಳದಾರಿದಿರೂ ॥ ೮ ॥

ನಿಚ್ಚಳ ನಿರ್ಮಲ ಸತ್ಯೋಜ್ವಲೆ ಮಹಿ ।
ಮೋಚ್ಚ ಮಹೋದಯೆ ಶುಭವಿಜಯೇ ॥
ಸಚ್ಚರಿತೋತ್ಕರ್ಷಾಚಲ ಧೈರ್ಯ ಸ ।
ಮುಚ್ಚಯೆ ಸೌಮ್ಯಪ್ರದೆ ಸದಯೇ ॥ ೯ ॥

ಇಂತಹ ದೇವಿಯ ಸೇವಿಪ ಭಾಗ್ಯ ಮ ।
ಹಾಂತ ಶುಭೋದಯ ಪುಣ್ಯಮಯಾ ॥
ಸಂತಸದಿಂದೆಸಗುತ್ತೆ ಕೃತಾರ್ಥತೆ ।
ಯಾಂತೇ ಗಳಿಪುದು ಕೀರುತಿಯಾ ॥ ೧೦ ॥



# ಅರ್ಪಣೆ

ಓ ದೇವಿ! ಕನ್ನಡಾಂಬೆಯೆ! ನಿನ್ನ ಚರಣದಾ।
ರಾಧನೆಯ ಭಾಗ್ಯಮಂ ಕೊಡು ನಿಚ್ಚಮೆನಗೇ ॥
ಸಾಧನೆಯು ಬೇರೇಕೆ? ಸೌಖ್ಯಸಾನಂದಕ್ಕೆ।
ಪಾದಕರ್ಪಿಪೆ **ಕಾವ್ಯ ಕುಸುಮಂಗಳ** ನಿನಗೇ ॥ ೧ ॥

ಹಿರಿಯ ಕವಿ ನಾನಲ್ಲ; ಬಿರುದು ಬಾವುಲಿಯಿಲ್ಲ।
ಸರಿಯೊ? ತಪ್ಪೋ? ತಿಳಿಯೆ ತವ ಪೂಜೆ ತಾಯೇ ॥
ನರರ ಮೆಚ್ಚಿಸಲೇನು ಸಾಫಲ್ಯ? ನೀನೊಮ್ಮೆ।
ಹರಕೆಯಾಶೀರ್ವಾದ ನೀಡೊಲಿದು **ಸಿರಿಯೇ** ॥ ೨ ॥

ಹಳತೊ? ಹೊಸತೋ? ಯೆನಗೆ ಆ ಗೊಡವೆಯೇ ಯಿಲ್ಲ।
ಸುಲಭದಲಿ ಬಂದಂತೆ ಬಣ್ಣಿಸಿದೆನಮ್ಮಾ ॥
ಕೆಲಸವೇನೋ ಮಾಳ್ಪೆ ಹೇಗೊ? ಯೆಂತೋ? ಮುಂದೆ।
ಬೆಳಗಿಸುವ ಕೀರ್ತಿಯದು ನಿನಗೆ ನೋಡಮ್ಮಾ ॥ ೩ ॥

ಮುಗುಳುನಗೆಯಿಂದೊಮ್ಮೆ ನೋಡಿ ಈ ಬಾಲಕನ।
ಮಗನೆಂದೆ ಹರಸೆ ನೀ ನಾ ಧನ್ಯನಾದೇ ॥
ಹಗಲು ಇರುಳೂ ಎನಗೆ ನಿನ್ನ ನೆನಪೇ ಯಿರಲಿ।
ಭಗವಂತನೊಡನೆಯೂ ಬೇಡುತಿರುವೆನಿದೇ ॥ ೪ ॥

ಇದೆ ನಿನಗೆ ಮಂಗಳಾರತಿಯು ಹೇ ದೇವಿ ಕರು।
ಣದೆ ದಿವ್ಯ ನವ್ಯಪ್ರಸಾದವನು ನೀಡೂ ॥
ಹೃದಯಕಾನಂದಿಸುವೆ ನಿನ್ನೊಲುಮೆಯೆಂಬ ನವ।
ಸುಧೆಯುಂಡು ನಿರತ ನಾ ಮಣಿವೆ ಕಾಪಾಡೂ ॥ ೫ ॥

## ಈ ಗ್ರಂಥಕರ್ತರಿಂದ
## ವಿರಚಿಸಲ್ಪಟ್ಟು ಅಚ್ಚಾಗಲಿಕ್ಕಿರುವ ಹೊತ್ತಗೆಗಳು

| | |
|---|---|
| ಮೃಗಾವತಿಪರಿಣಯ | (ಯಕ್ಷಗಾನ - ಪೌರಾಣಿಕ) |
| ಸೀಮಂತಿನಿಕಲ್ಯಾಣ | " " |
| ಕಚೋಪಾಖ್ಯಾನ | " " |
| ಸಾಹಸಾಂಬ | " " |
| ಸೀತಾವಿಜಯ | " " |
| ಸುಲೋಚನಾ ಸ್ವಯಂವರ | " " |
| ಚಂದ್ರಹಾಸ | (ನಾಟಕ - ಪೌರಾಣಿಕ) |
| ಭಕ್ತ ಪ್ರಹ್ಲಾದ | " " |
| ಗೌತಮ ವಿಜಯ | (ಯಕ್ಷಗಾನ - ಐತಿಹಾಸಿಕ) |
| ವೀರ ರಮಣಿ | (ಯಕ್ಷಗಾನ - ಸಾಮಾಜಿಕ) |
| ಮದ್ಯೋಚ್ಚಾಟನ | " " |
| ಯಕ್ಷಗಾನ ಪ್ರಸಕ್ತಿ | (ಕವನ) |
| ಅರ್ಥ ಸಹಿತ ಪಂಚವಟಿ | (ಯಕ್ಷಗಾನ - ಪೌರಾಣಿಕ) |

ಕನ್ನಡ ಬಂಧುಗಳು ಪ್ರೋತ್ಸಾಹವಿತ್ತಲ್ಲಿ
ಇವುಗಳನ್ನೆಲ್ಲಾ ಬೆಳಕಿಗೆ ತರಬೇಕೆಂದು ನನ್ನ ಹೆಬ್ಬಯಕೆ

— ಕೀರಿಕ್ಕಾಡು, ಮಾಸ್ತರ್ ವಿಷ್ಣು ಭಟ್ಟ,
ದೇಲಂಪಾಡಿ ಗ್ರಾಮ,
ಆದೂರು ಪೋಸ್ಟು,
ಕಾಸರಗೋಡು, ದ. ಕ.

